## ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 575
02. ಸದಸ್ಯರ ಹೆಸರು : ಶ್ರೀ ಕೆ. ಸಿ. ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
03. ಉತ್ತರಿಸುವ ದಿನಾಂಕ : 24.09.2020
04. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಪೋಲೀಸ್ ಇಲಾಖೆಯಿಂದ ಕರ್ತವ್ಯ ನಿರ್ವಹಿಸಲು ಸಿಬ್ಬಂದಿಗಳನ್ನು ನಿಯೋಜಿಸಲಾಗಿದೆಯೇ, ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಪೋಲೀಸರ ವಿವರಗಳನ್ನು ಒದಗಿಸುವುದು. | ಹೌದು.<br><br>ಪ್ರಸ್ತುತ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಪೋಲೀಸ್ ಸಿಬ್ಬಂದಿಗಳ ವಿವರ ಹಾಗೂ ಕರ್ತವ್ಯ ನಿರ್ವಹಿಸುತ್ತಿರುವ ಅವಧಿಯನ್ನು **ಅನುಬಂಧ**ದಲ್ಲಿ ಒದಗಿಸಿದೆ. |
| ಆ) | ಈ ರೀತಿ ನಿಯೋಜನೆಗೊಂಡವರು ಎಷ್ಟು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ, ಪ್ರಸ್ತುತ ನಿಯೋಜನೆ ಮೇಲಿದ್ದವರನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿದೆಯೇ. | |
| ಇ) | ಬಿಡುಗಡೆಗೊಳಿಸಿ ಆದೇಶ ಹೊರಡಿಸಿದ್ದರೂ ನಿಯೋಜನೆ ಮೇಲಿದ್ದವರು ತಮ್ಮ ಮಾತೃ ಇಲಾಖೆಗೆ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದಾರೆಯೇ. | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 50ರಡಿ ಸರ್ಕಾರಿ ನೌಕರರ ನಿಯೋಜನೆಯನ್ನು ಮೊದಲ ಹಂತದಲ್ಲಿ 3 ವರ್ಷಗಳ ಕಾಲ, ತದನಂತರ ಇಲಾಖಾ ಹಂತದಲ್ಲಿ 01 ವರ್ಷದಂತೆ ಗರಿಷ್ಠ 05 ವರ್ಷಗಳ ಅವಧಿಯವರೆಗೆ ನಿಯೋಜನೆ ಮಾಡುವ ಅಧಿಕಾರವಿರುತ್ತದೆ. 05 ವರ್ಷಗಳ ನಿಯೋಜನಾ ಅವಧಿಯನ್ನು ಮೀರಿದ ಪ್ರಕರಣಗಳಲ್ಲಿ ಕ.ನಾ.ಸೇ.ನಿ. ನಿಯಮ 50(3)ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ನೀಡಲಾಗಿದೆ.<br><br>ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ 33 ಪಿಪಿಎಸ್ 2020 ದಿನಾಂಕ: 18.05.2020 ರಲ್ಲಿ ಬಿ.ಡಿ.ಎ. ಸಂಸ್ಥೆಯಲ್ಲಿ ಎರಡು ವರ್ಷ ಮೀರಿದ ಪ್ರಕರಣಗಳು ಹಾಗೂ ವಿಶೇಷ ಪ್ರಕರಣಗಳಿದ್ದಲ್ಲಿ ಸರ್ಕಾರದ ಪೂರ್ವಾನುಮತಿ ಪಡೆದು ನಿಯೋಜನೆಗಳನ್ನು ಮುಂದುವರೆಸಲು ಸೂಚಿಸಲಾಗಿದ್ದು, ಅದರಂತೆ, ಡಿಜಿ & ಐಜಿಪಿ ರವರ ಕಛೇರಿ ಆದೇಶ ಸಂಖ್ಯೆ: 06/ಸಿಬ್ಬಂದಿ-9/2020-21, ದಿನಾಂಕ: 22.05.2020 ರಲ್ಲಿ 10 ಪೋಲೀಸ್ ಅಧಿಕಾರಿ / ಸಿಬ್ಬಂದಿಗಳ ನಿಯೋಜನೆಯನ್ನು ರದ್ದುಗೊಳಿಸಿ ಆದೇಶಿಸಲಾಗಿದೆ.<br><br>ಸರ್ಕಾರದ ಪತ್ರ ಸಂಖ್ಯೆ: ಹೆಚ್.ಡಿ 40 ಪಿಪಿಎಸ್ 2020, ದಿನಾಂಕ:09.07.2020 ರಲ್ಲಿ ಡಿಜಿ ಮತ್ತು ಐಜಿಪಿ ರವರಿಗೆ ಈ ಕೆಳಕಂಡಂತೆ ನಿರ್ದೇಶಿಸಲಾಗಿದೆ.<br><br>**"ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಪೋಲೀಸ್ ಸಿಬ್ಬಂದಿಗಳು ನಿಯೋಜನೆ ಅವಧಿ ಮೀರಿ ಇರುವುದು ಕಂಡುಬರುತ್ತದೆ. ಇದಕ್ಕೆ ಕಾರಣಗಳೇನೆಂದು ತಿಳಿದುಕೊಂಡು ಕೂಡಲೇ ಕಟ್ಟುನಿಟ್ಟಿನ ನೀತಿಯನ್ನು ಮಾಡುವ ಬಗ್ಗೆ ಕೂಡಲೇ ಕ್ರಮ ವಹಿಸುವುದು ಹಾಗೂ ವೈಯಕ್ತಿಕ ಪ್ರಕರಣಗಳನ್ನು ಪರಿಗಣಿಸದೇ ಮುಂದಿನ ನೀತಿ ಅನುಸಾರವಾಗಿ ಕ್ರಮ ಜರುಗಿಸುವುದು".** |
| ಈ) | ಇನ್ನೂ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲೇ ಅನಧಿಕೃತ ಕೆಲಸಗಳಲ್ಲಿ ತೊಡಗಿರುವ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ, ಇದ್ದಲ್ಲಿ ಸಂಬಂಧಿಸಿದವರ ವಿರುದ್ಧ ಕ್ರಮ ಕೈಗೊಳ್ಳಲಾಗುವುದೇ? | |

HD/66/PPS/2020-PS_B

**(ಬಸವರಾಜ ಬೊಮ್ಮಾಯಿ)**
**ಗೃಹ ಸಚಿವರು**